## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 726 |
| ಸದಸ್ಯರ ಹೆಸರು | ಶ್ರೀ ಶರಣಪ್ಪ ಮಟ್ಟೂರ<br>(ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | 12-03-2020 |
| ಉತ್ತರಿಸುವ ಸಚಿವರು | ಮಾನ್ಯ ಮುಖ್ಯಮಂತ್ರಿಗಳು |

| ಪ್ರಶ್ನೆ | ಉತ್ತರ |
|---|---|
| ಅ) ವಾಣಿಜ್ಯ ತೆರಿಗೆ ಇಲಾಖೆಯಲ್ಲಿ 01.07.1984ರ ನಂತರ ದಿನಗೂಲಿ ನೌಕರರಾಗಿ ಸೇರಿದ್ದ ನೌಕರರಿಗೆ ಸಂಬಂಧಪಟ್ಟಂತೆ ಸುಪ್ರೀಂ ಕೋರ್ಟ್ ಆದೇಶ ಸಂಖ್ಯೆ (ಸಿಎ ನಂ 3595-3612/1999), ದಿನಾಂಕ: 10.04.2006ರ ಆದೇಶ ಪ್ಯಾರಾ ನಂ.46ರಲ್ಲಿ ಇಲಾಖೆಗೆ ನಿರ್ದಿಷ್ಟವಾಗಿ ನಿಗದಿಪಡಿಸಿದ್ದ ತೀರ್ಪಿನ ವಿರುದ್ಧ ಸಕ್ರಮಾತಿ ಮಾಡಿರುವುದು ನಿಜವೇ; ಇದ್ದಲ್ಲಿ ತೀರ್ಪಿನ ವಿರುದ್ಧ ಸಕ್ರಮಾತಿ ಮಾಡಲು ಕಾರಣಗಳೇನು; | ಮಾನ್ಯ ಸರ್ವೋಚ್ಛ ನ್ಯಾಯಾಲಯವು ದಿನಾಂಕ: 10.04.2006ರ ಆದೇಶದಲ್ಲಿ ವಿವಿಧ ಹುದ್ದೆಗಳಲ್ಲಿ ದಿನಗೂಲಿ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದ ನೌಕರರಿಗೆ ಸಂಬಂಧಿಸಿದಂತೆ ಸಕ್ರಮಾತಿಗೊಳಿಸಲು ನೀಡಿರುವ ಅರ್ಹತಾ ಮಾನದಂಡದನ್ವಯ ದಿನಾಂಕ: 25.05.2006ರ ಸರ್ಕಾರದ ಸುತ್ತೋಲೆಯಲ್ಲಿ ಕಾಣಿಸಿರುವ 4 ಷರತ್ತುಗಳನ್ನು ಪೂರೈಸಿದ ದಿನಗೂಲಿ ನೌಕರರನ್ನು ಪರಿಗಣಿಸಬಹುದೆಂದು ತಿಳಿಸಿರುವಂತೆ ವಾಣಿಜ್ಯ ತೆರಿಗೆಗಳ ಇಲಾಖೆಯಲ್ಲಿ ದಿನಾಂಕ: 01.07.1984ರ ನಂತರ ನೇಮಕಗೊಂಡಿರುವ ದಿನಗೂಲಿ ನೌಕರರನ್ನು ಸಕ್ರಮಾತಿಗೊಳಿಸಲಾಗಿದೆ. |
| ಆ) ಸುಪ್ರೀಂ ಕೋರ್ಟ್ ಆದೇಶ ಉಲ್ಲಂಘಿಸಿ ದಿನಗೂಲಿ ನೌಕರರಿಗೆ ಹಿಂದಿನ ದಿನಾಂಕಕ್ಕೆ ಜ್ಯೇಷ್ಠತೆಯನ್ನು ನಿಗದಿಪಡಿಸಿ ಸಕ್ರಮಾತಿ ಮಾಡಿರುವ ಲೋಪವನ್ನು ಸರಿಪಡಿಸಬೇಕೆಂದು ಪ್ರಕರಣ ಸಂಖ್ಯೆ: 131/2016 (ಸೇವೆ) ರಲ್ಲಿ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದಿಂದ ತೀರ್ಮ ನೀಡಿರುವುದು ನಿಜವೇ, ಇದರನ್ವಯ ಕೈಗೊಂಡಿರುವ ಕ್ರಮಗಳೇನು; | ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದಿಂದ ತೀರ್ಮ ಬಂದಿರುವುದಕ್ಕೆ ಸಂಬಂಧಿಸಿದಂತೆ ದಿನಾಂಕ: 31.03.2018ರಂದು ಆಯುಕ್ತರ ಕಛೇರಿಯಿಂದ ಪತ್ರವನ್ನು ಸ್ವಿಕರಿಸಲಾಗಿದೆ. ಸದರಿ ಪ್ರಸ್ತಾವನೆಗೆ ಸಂಬಂಧಿಸಿದಂತೆ ಕಡತ ಸಂಖ್ಯೆ: ಎಫ್.ಡಿ. 37 ಸಿ.ಎಸ್.ಎಂ. 2018 ರಲ್ಲಿ ಪರಿಶೀಲಿಸಲಾಗುತ್ತಿದೆ. |
| ಇ) ಸದರಿ ಆಯೋಗದ ತೀರ್ಪಿನನ್ವಯ ಕ್ರಮ ಕೈಗೊಳ್ಳಲು ವಾಣಿಜ್ಯ ತೆರಿಗೆ ಇಲಾಖೆಯು ಯಾವ ದಿನಾಂಕದಂದು ಹಣಕಾಸಿನ ಇಲಾಖೆಗೆ ಅಭಿಪ್ರಾಯ ಕೋರಿದೆ; (ಪ್ರತಿ ನೀಡುವುದು) | |

| | |
|---|---|
| ಈ) ಇದಕ್ಕೆ ಸಂಬಂಧಪಟ್ಟ ಕಡತ ಸಂಖ್ಯೆ: ಎಫ್‌ಡಿ 37 ಸಿಎಸ್‌ಎಂ 2018 (ಕಂಪ್ಯೂಟರ್ ನಂ.97700)ಕ್ಕೆ ಅಭಿಪ್ರಾಯ ನೀಡಲು ವಿಳಂಬವಾಗುತ್ತಿರಲು ಕಾರಣಗಳೇನು; ಈ ಬಗ್ಗೆ ಅಭಿಪ್ರಾಯ ಕೋರಿ ಹಣಕಾಸಿನ ಇಲಾಖೆಯಿಂದ ಯಾವ್ಯಾವ ಇಲಾಖೆಗಳಿಗೆ ಕಳುಹಿಸಲಾಗಿದೆ; ಆ ಇಲಾಖೆಗಳು ನೀಡಿರುವ ಅಭಿಪ್ರಾಯದ ಪ್ರತಿ ಒದಗಿಸುವುದು; ಪ್ರಸ್ತುತ ಕಡತವು ಯಾವ ಹಂತದಲ್ಲಿದೆ; (ಸಮಗ್ರ ವಿವರ ನೀಡುವುದು) | ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದ ನಿರ್ದೇಶನದ ಬಗ್ಗೆ ಕೈಗೊಳ್ಳಬೇಕಾದ ಕ್ರಮದ ಕುರಿತು ಕಡತ ಸಂಖ್ಯೆ: ಎಫ್.ಡಿ. 37 ಸಿ.ಎಸ್.ಎಂ. 2018 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಮತ್ತು ಆರ್ಥಿಕ ಇಲಾಖೆ (ಸೇವೆಗಳು) ವಿಭಾಗದ ಅಭಿಪ್ರಾಯವನ್ನು ಪಡೆಯಲಾಗಿರುತ್ತದೆ. ತದನಂತರ ಕಡತವನ್ನು ಕಾನೂನು ಇಲಾಖೆಯ ಪರಿಗಣಿತ ಅಭಿಪ್ರಾಯಕ್ಕಾಗಿ ದಿನಾಂಕ: 21.08.2019ರಂದು ಸಲ್ಲಿಸಲಾಗಿದ್ದು, ಕಾನೂನು ಇಲಾಖೆಯು ಕಡತವನ್ನು ಮಾನ್ಯ ಅಡ್ವೋಕೆಟ್ ಜನರಲ್ ರವರ ಅಭಿಪ್ರಾಯವನ್ನು ಪಡೆಯಲು ಕಳುಹಿಸಿರುತ್ತದೆ. |
| ಉ) ಯಾವ ನಿರ್ದಿಷ್ಟ ದಿನಾಂಕದಂದು ಅಭಿಪ್ರಾಯ ನೀಡಿ ನೇರ ನೇಮಕಾತಿಯಾದ ನೌಕರರಿಗೆ ನ್ಯಾಯವನ್ನು ಒದಗಿಸಲಾಗುವುದು? | ನಿರ್ದಿಷ್ಟ ದಿನಾಂಕವನ್ನು ತಿಳಿಸಲು ಸಾಧ್ಯವಾಗುವುದಿಲ್ಲ. |

ಆಇ 58 ವಾತೆಸಿ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ